<u>**ಕರ್ನಾಟಕ ವಿಧಾನ ಪರಿಷತ್ತು**</u>

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2093 |
| 2 | ಸದಸ್ಯರ ಹೆಸರು | : | ಶ್ರೀ ಮುನಿರಾಜು ಗೌಡ ಪಿ.ಎಂ. (ವಿಧಾನಸಭೆಯಿಂದ ಚುನಾಯಿತರಾದವರು) |
| 3 | ಉತ್ತರಿಸುವ ದಿನಾಂಕ | : | 17-03-2022 |
| 4 | ಉತ್ತರಿಸುವ ಸಚಿವರು | : | ಗೃಹ ಸಚಿವರು |

| ಕ್ರಮ ಸಂಖ್ಯೆ | ಚುಕ್ಕೆ ಗುರುತಿಲ್ಲದ ಪ್ರಶ್ನೆ | ಉತ್ತರ |
|---|---|---|
| (ಅ) | ಪೊಲೀಸ್ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ದ್ವಿತೀಯ ದರ್ಜೆಯ ಸಹಾಯಕರ ಸೇವಾ ಜ್ಯೇಷ್ಠತೆಯು ವಿರೋಧಾಭಾಸಗಳಿಂದ ಕೂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ (ವಿವರ ನೀಡುವುದು) | ಪೊಲೀಸ್ ಇಲಾಖೆಯಲ್ಲಿ ದ್ವಿತೀಯ ದರ್ಜೆ ಸಹಾಯಕ ಹುದ್ದೆಗೆ ಪೊಲೀಸ್ ಅಧೀಕ್ಷಕರು/ತತ್ಸಮಾನ ದರ್ಜೆಯ ಅಧಿಕಾರಿಗಳು ನೇಮಕಾತಿ ಪ್ರಾಧಿಕಾರಿಗಳಾಗಿದ್ದು, ಕರ್ನಾಟಕ ಸರ್ಕಾರಿ ನೌಕರರ (ಜ್ಯೇಷ್ಠತಾ) ನಿಯಮಗಳು 1957ರ ಪ್ರಕಾರ ನೇಮಕಾತಿ ಪ್ರಾಧಿಕಾರಿಗಳು ಜ್ಯೇಷ್ಠತಾ ಪಟ್ಟಿಗಳನ್ನು ಸಿದ್ಧಪಡಿಸುತ್ತಿದ್ದು, ಇದರಲ್ಲಿ ಯಾವುದೇ ವಿರೋಧಾಭಾಸಗಳಿರುವುದಿಲ್ಲ. |
| (ಆ) | ಪೊಲೀಸ್ ಕೇಂದ್ರ ಕಛೇರಿಯಲ್ಲಿ ದ್ವಿತೀಯ ದರ್ಜೆಯ ಸಹಾಯಕರ ಹುದ್ದೆಯಲ್ಲಿ ನೇಮಕಗೊಂಡ ವ್ಯಕ್ತಿಯು ನಿಯಮಗಳಲ್ಲಿ ಅವಕಾಶವಿಲ್ಲದಿದ್ದರೂ ಕೇವಲ 3 ವರ್ಷಗಳಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಮುಂಬಡ್ತಿ ಹೊಂದುತ್ತಿದ್ದು ಇತರೆ ಕಛೇರಿಗಳಲ್ಲಿ ದ್ವಿತೀಯ ದರ್ಜೆಯ ಸಹಾಯಕರ ಹುದ್ದೆಯಲ್ಲಿ ನೇಮಕಗೊಂಡ ವ್ಯಕ್ತಿಯು 20 ವರ್ಷಗಳ ಸೇವೆ ಸಲ್ಲಿಸಿದರೂ ಮುಂಬಡ್ತಿ ದೊರೆಯದಿರುವ ಕುರಿತು ಸರ್ಕಾರದ ನಿಲುವೇನು; | ಕರ್ನಾಟಕ ರಾಜ್ಯ ಪೊಲೀಸ್ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಪ್ರಥಮ ದರ್ಜೆ ಸಹಾಯಕ ಹುದ್ದೆಗಳನ್ನು ಶೇಕಡಾ 50 ನೇರ ನೇಮಕಾತಿ ಇನ್ನುಳಿದ ಶೇಕಡಾ 50 ಹುದ್ದೆಗಳನ್ನು ದ್ವಿತೀಯ ದರ್ಜೆ ಸಹಾಯಕ ಹುದ್ದೆಯಿಂದ ಜ್ಯೇಷ್ಠತೆ ಹಾಗೂ ಅರ್ಹತೆಯ ಆಧಾರದ ಮೇಲೆ ಮುಂಬಡ್ತಿಯಿಂದ ತುಂಬಬೇಕಾಗಿರುತ್ತದೆ. ಈ ರೀತಿ ಮುಂಬಡ್ತಿಗೆ ಪರಿಗಣಿಸುವಾಗ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ದ್ವಿ.ದ.ಸ ವೃಂದದಲ್ಲಿ ಕನಿಷ್ಠ 05 ವರ್ಷಗಳಿಗೆ ಕಡಿಮೆ ಇಲ್ಲದ ಸೇವೆಯನ್ನು ನಿಗಧಿಪಡಿಸಿದ್ದು, 05 ವರ್ಷ ಸೇವೆ ಸಲ್ಲಿಸಿದ ನೌಕರರು ಲಭ್ಯವಿಲ್ಲದಿದ್ದಲ್ಲಿ 03 ವರ್ಷಗಳಿಗಿಂತ ಕಡಿಮೆ ಇಲ್ಲದ ಸೇವೆಯನ್ನು ಸಲಿಸಿರುವ ನೌಕರರನ್ನು ಮುಂಬಡ್ತಿಗೆ ಪರಿಗಣಿಸಬಹುದಾಗಿರುತ್ತದೆ.<br>ಪೊಲೀಸ್ ಇಲಾಖೆಯ ಪರಿಷ್ಕೃತ ಸ್ಥಾಯಿ ಆದೇಶ ಸಂಖ್ಯೆ:704 ರಲ್ಲಿ ಪ್ರಧಾನ ಕಛೇರಿ ಒಳಗೊಂಡಂತೆ 13 ವಲಯ/ಘಟಕಗಳನ್ನು ವರ್ಗೀಕರಿಸಲಾಗಿರುತ್ತದೆ. ಸದರಿ ಘಟಕ/ವಲಯಧಿಕಾರಿಗಳು ತಮ್ಮ ಅಧೀನ ಕಛೇರಿಗಳ ದ್ವಿ.ದ.ಸ. ಹುದ್ದೆಯ ನೇಮಕಾತಿ ಪ್ರಾಧಿಕಾರಿಗಳಿಂದ ಪಡೆದ ಜ್ಯೇಷ್ಠತಾ ಪಟ್ಟಿಗಳ ಆಧಾರದ ಮೇಲೆ ಕ್ರೋಢೀಕೃತ ಜ್ಯೇಷ್ಠತಾ ಪಟ್ಟಿಯನ್ನು ಹೊರಡಿಸಿ ಜ್ಯೇಷ್ಠತೆ ಹಾಗೂ ಅರ್ಹತೆಯ ಅನ್ವಯ ಮತ್ತು ನಿಯಮಾನುಸಾರ |

| | | |
|---|---|---|
| | | ಲಭ್ಯವಾಗುವ ಪ್ರಥಮ ದರ್ಜೆ ಸಹಾಯಕರ ಮುಂಬಡ್ತಿ ರಿಕ್ತಸ್ಥಾನಗಳಿಗೆ ಬಡ್ತಿ ನೀಡುತ್ತಿರುತ್ತಾರೆ.<br><br>ಆಯಾ ವಲಯಗಳಲ್ಲಿ ಮುಂಬಡ್ತಿ ನೀಡುವಾಗ ಅರ್ಹ ದ್ವಿ.ದ.ಸ. ರವರು ಲಭ್ಯವಿಲ್ಲದಿದ್ದಲ್ಲಿ ಹಾಗೂ ರಿಕ್ತ ಹುದ್ದೆಗಳು ಲಭ್ಯವಿಲ್ಲದಿದ್ದಲ್ಲಿ ಮುಂಬಡ್ತಿ ವಿಳಂಬವಾಗುತ್ತದೆ. |
| (ಇ) | ಒಂದೇ ಇಲಾಖೆಯ ಒಂದೇ ಹುದ್ದೆಗೆ ನೇಮಕಗೊಂಡ ವ್ಯಕ್ತಿಗೆ ಸಂವಿಧಾನದ ಆಶಯದಂತೆ ಒಂದೇ ರೀತಿಯಲ್ಲಿ ಮುಂಬಡ್ತಿಗೆ ಅವಕಾಶವಿರಬೇಕಾಗಿದ್ದು ಇಲಾಖೆಯು ಈ ಅವಕಾಶವನ್ನು ನಿರಾಕರಿಸುವ ಮೂಲಕ ನಿಯಾಮಾವಳಿಗಳಿಗೆ ವಿರುದ್ಧವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಕುರಿತು ಸರ್ಕಾರದ ನಿಲುವೇನು? | ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಮುಂಬಡ್ತಿಗೆ ನಿಗಧಿಪಡಿಸಿರುವ ಅರ್ಹತೆ ಒಂದೇ ರೀತಿಯಾಗಿದ್ದರೂ ಸಹಾ ಇಲಾಖೆಯ ದ್ವಿ.ದ.ಸ. & ಪ್ರ.ದ.ಸ. ಹುದ್ದೆಗಳು ಜಿಲ್ಲೆ & ವಲಯದ ಹುದ್ದೆಗಳಾಗಿರುತ್ತದೆ. ಆಯಾ ವಲಯದಲ್ಲಿನ ರಿಕ್ತ ಹುದ್ದೆಯ ಆಧಾರದ ಮೇಲೆ ಮುಂಬಡ್ತಿ ನೀಡುವುದರಿಂದ ಒಂದು ವಲಯದ ದ್ವಿ.ದ.ಸ.ರವರ ಮುಂಬಡ್ತಿಗೂ ಹಾಗೂ ಇನ್ನೊಂದು ವಲಯದ ದ್ವಿ.ದ.ಸ ರವರ ಮುಂಬಡ್ತಿಗೆ ಅವಕಾಶವು ಬೇರೆ ಬೇರೆಯಾಗಿರುತ್ತದೆ. ಇದು ನಿಯಮಗಳ ವಿರುದ್ಧವಾಗಿರುವುದಿಲ್ಲ.<br><br>ಅಲ್ಲದೇ, ಪೊಲೀಸ್ ಇಲಾಖೆಯಲ್ಲಿ ಕರ್ನಾಟಕ ಸರ್ಕಾರಿ ನೌಕರರ (ಜ್ಯೇಷ್ಠತಾ) ನಿಯಮಗಳು 1957ರ ಪ್ರಕಾರ ಸಕ್ಷಮ ನೇಮಕಾತಿ ಪ್ರಾಧಿಕಾರಿಗಳು ದ್ವಿತೀಯ ದರ್ಜೆ ಸಹಾಯಕರ ಜ್ಯೇಷ್ಠತೆ ಮತ್ತು ಅರ್ಹತೆಯ ಆಧಾರದ ಮೇಲೆ ನಿಯಮಾನುಸಾರ ಲಭ್ಯವಾಗುವ ಪ್ರಥಮ ದರ್ಜೆ ಸಹಾಯಕರ ಮುಂಬಡ್ತಿ ರಿಕ್ತಸ್ಥಾನಗಳಿಗೆ ಬಡ್ತಿ ನೀಡುತ್ತಿರುವುದರಿಂದ ಇಲಾಖೆಯಲ್ಲಿನ ಮುಂಬಡ್ತಿ ಕ್ರಮವು ನಿಯಮಾನುಸಾರ ಇರುತ್ತದೆ. |

ಸಂಖ್ಯೆ: ಒಇ 46 ಪಿಇಎಂ 2022

(ಆರಗ ಜ್ಞಾನೇಂದ್ರ)
ಗೃಹ ಸಚಿವರು